# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 332
ಮಾನ್ಯ ಸದಸ್ಯರ ಹೆಸರು : ಶ್ರೀ.ಕೆ.ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ: : 03-02-2021
ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಫಸಲ್ ಭೀಮಾ ಯೋಜನೆಯು ರೈತರಿಗೆ ವಿಮೆ ನೀಡುವಲ್ಲಿ ಸಂಪೂರ್ಣ ವಿಫಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆಯು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, 2016-17ನೇ ಸಾಲಿನ ಮುಂಗಾರು ಹಂಗಾಮಿನಿಂದ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ರಾಜ್ಯದಲ್ಲಿ ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಫಸಲ್ ಬೀಮಾ ಯೋಜನೆಯು ವರ್ಷದಿಂದ ವರ್ಷಕ್ಕೆ ಯಶಸ್ವಿಯಾಗಿ ಅನುಷ್ಠಾನಗೊಳಿಸಲಾಗುತ್ತಿದೆ.<br><br>ಕರ್ನಾಟಕ ರೈತ ಸುರಕ್ಷ ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆಯಡಿ 2016-17ನೇ ಸಾಲಿನಿಂದ 2020-21ನೇ ಸಾಲಿನವರೆಗೆ ನೋಂದಣಿಯಾದ ಹಂಗಾಮುವಾರು ರೈತರ ವಿವರ ಈ ಕೆಳಕಂಡಂತಿದೆ. |

| ವರ್ಷ/ ಹಂಗಾಮು | ಸಾಲ ಪಡೆದ ರೈತರ ಸಂಖ್ಯೆ | ಸಾಲ ಪಡೆಯದ ರೈತರ ಸಂಖ್ಯೆ | ನೋಂದಣಿಯಾದ ಒಟ್ಟು ರೈತರ ಸಂಖ್ಯೆ | ವಿಸ್ತೀರ್ಣ (ಹೆ) |
|---|---|---|---|---|
| **2016** ಮುಂಗಾರು | **743450** | **200100** | **943550** | **1303214** |
| **2016-17** ಹಿಂಗಾರು & ಬೇಸಿಗೆ | **148679** | **1031018** | **1179697** | **1701619** |
| **2017** ಮುಂಗಾರು | **572141** | **761012** | **1333153** | **1873067** |
| **2017-18** ಹಿಂಗಾರು & ಬೇಸಿಗೆ | **11089** | **11832** | **22921** | **36063** |
| **2018** ಮುಂಗಾರು | **532782** | **690206** | **1222988** | **1452383** |

| | | | | |
|---|---|---|---|---|
| 2018-19 ಹಿಂಗಾರು & ಬೇಸಿಗೆ | 65779 | 496183 | 561962 | 737568 |
| 2019 ಮುಂಗಾರು | 597732 | 822711 | 1420443 | 1215211 |
| 2019-20 ಹಿಂಗಾರು & ಬೇಸಿಗೆ | 74448 | 607038 | 681486 | 828792 |
| 2020 ಮುಂಗಾರು | 355707 | 744940 | 1100647 | 1327572 |

| | | |
|---|---|---|
| ಆ) | ಫಸಲ್ ಬೀಮಾ ಯೋಜನೆಯಲ್ಲಿ ರೈತರಿಗಿಂತ ವಿಮಾ ಕಂಪನಿಗಳ ಹೆಚ್ಚು ಲಾಭ ಮಾಡಿಕೊಂಡಿದ್ದು, ಯೋಜನೆಯ ಕ್ಲೇಮ್ ನೀಡಲು ಕಠಿಣ ಷರತ್ತುಗಳ ತಾಂತ್ರಿಕ ಸಮಸ್ಯೆ ಜಾಗೃತಿಯ ಕೊರತೆ ಮತ್ತು ಅಡ್ಡಿಗಳ ಕಾರಣಗಳಿಂದ ಸದರಿ ಯೋಜನೆಯು ದುರ್ಬಲವಾಗಿದ್ದು, ಯೋಜನೆಯು ಯಶಸ್ಸಿನ ನಿರೀಕ್ಷಿತ ಮಟ್ಟವನ್ನು ತಲುಪದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೇಂದ್ರ ಸರ್ಕಾರವು ಎಂಪ್ಯಾನೆಲ್ ಮಾಡಿರುವ ವಿಮಾ ಸಂಸ್ಥೆಗಳಿಂದ ರಾಜ್ಯ ಸರ್ಕಾರವು ಇ -ಟೆಂಡರ್ ಮುಖಾಂತರ ಪ್ರೀಮಿಯಂ ಮೊತ್ತ ನಿರ್ಧರಿಸುತ್ತದೆ. ಹಾಗೂ ಕೇಂದ್ರ ಸರ್ಕಾರದ ಮಾರ್ಗ ಸೂಚಿಯಂತೆ ಬೆಳೆ ಕಟಾವು ಪ್ರಯೋಗಗಳ ವರದಿಯಂತೆ ಬೆಳೆ ನಷ್ಟದ ಪರಿಹಾರವನ್ನು ಲೆಕ್ಕ ಹಾಕಲಾಗುತ್ತದೆ.<br><br>ಈ ಯೋಜನೆಯು ಅತ್ಯಂತ ವೈಜ್ಞಾನಿಕವಾಗಿ ಹೋಬಳಿ/ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಕೃಷಿ, ಕಂದಾಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮತ್ತು ತೋಟಗಾರಿಕೆಯವರು ಕೈಗೊಳ್ಳುವ ಬೆಳೆ ಕಟಾವು ಪ್ರಯೋಗಗಳಿಂದ ಬಂದಂತಹ ವಾಸ್ತವಿಕ ಇಳುವರಿಯು ನಿಗದಿಪಡಿಸಲಾದ ಪ್ರಾರಂಭಿಕ ಇಳುವರಿಗಿಂತ ಕಡಿಮೆ ಇದ್ದರೆ, ಇಳುವರಿಯ ಕೊರತೆಗನುಗುಣವಾಗಿ ಹೋಬಳಿ/ ಗ್ರಾಮಪಂಚಾಯತಿಯ ವಿಮಾ ಘಟಕಗಳಲ್ಲಿ ಬೆಳೆ ವಿಮೆ ಮಾಡಿಸಿದ ಅರ್ಹ ರೈತರು ಬೆಳೆ ವಿಮಾ ನಷ್ಟ ಪರಿಹಾರ ಪಡೆಯಲು ಅರ್ಹರಾಗುತ್ತಾರೆ.<br><br>ಸಂರಕ್ಷಣೆ ತಂತ್ರಾಂಶದ ಮುಖಾಂತರ ಅರ್ಜಿ ಸಲ್ಲಿಸುವುದರಿಂದ ವಿಮಾ ಸಂಸ್ಥೆಗಳಿಂದ ಆಧಾರ್ ಸಂಖ್ಯೆ ಲಿಂಕ್ ಆದ ರೈತರ ಖಾತೆಗೆ ನೇರವಾಗಿ ಬೆಳೆ ವಿಮಾ ಪರಿಹಾರ ಜಮೆಯಾಗುವವರೆಗೆ ಅರ್ಜಿಯ ಸ್ಥಿತಿಯನ್ನು ಸಂರಕ್ಷಣೆ ಪೋರ್ಟಲ್ ಮೂಲಕ ಪಡೆಯಬಹುದಾಗಿದ್ದು ಯಾವುದೇ ತಾಂತ್ರಿಕ ಸಮಸ್ಯೆ ಕಂಡುಬಂದಲ್ಲಿ ಆಗಿಂದಾಗ್ಗೆ ಸರಿಪಡಿಸಲಾಗುತ್ತಿದೆ.<br><br>2018 ರಿಂದ ಬೆಳೆ ಸಮೀಕ್ಷೆಯಿಂದ ಅಪ್ ಲೋಡ್ ಮಾಡಲಾದ ಬೆಳೆ ಸಮೀಕ್ಷೆಯ ದತ್ತಾಂಶಗಳನ್ನು ಪರಿಗಣಿಸಿ ನೋಂದಣಿ ಮಾಡಿಸಿರುವ ಬೆಳೆ ಬೆಳೆದ ರೈತರಿಗೇ ವಿಮೆ ನಷ್ಟ ಪರಿಹಾರ ನೀಡಲು ಕ್ರಮವಹಿಸಲಾಗಿದೆ. |

| | | |
|---|---|---|
| | | ಆದ್ದರಿಂದ ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆಯಲ್ಲಿ ರೈತರಿಗೆ ಸಂರಕ್ಷಣೆ ತಂತ್ರಾಂಶದ ಮುಖಾಂತರ ಪಾರದರ್ಶಕವಾಗಿ ವಿಮಾ ಕಂಪನಿಗಳಿಂದ ಬೆಳೆ ವಿಮೆ ಪರಿಹಾರ ನೀಡಲಾಗುತ್ತಿದೆ.<br><br>ವಿಮೆ ಸಂಸ್ಥೆಗಳಿಂದ 2016-17 ರಿಂದ 2019-20ರ ವರೆಗೆ ಪಾವತಿಸಲಾದ ವಿಮಾ ಪರಿಹಾರದ ವಿವರವನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ.<br><br>ಪ್ರಕೃತಿ ವಿಕೋಪಗಳಿಂದ ಬೆಳೆ ನಷ್ಟ ಸಂಭವಿಸಿ ಇಳುವರಿ ಕೊರತೆ ಉಂಟಾದಲ್ಲಿ ಮಾತ್ರ ರಿಸ್ಕ್ ಕವರೇಜ್ ಮಾಡುವ ಸಲುವಾಗಿ ಬೆಳೆ ವಿಮೆಯನ್ನು ರೈತರಿಗೆ ಪಾವತಿಸಲಾಗುತ್ತಿದೆ ವಿನಃ ಪ್ರೀಮಿಯಂ ಮೊತ್ತ ಪಾವತಿಸಿದ ಎಲ್ಲಾ ರೈತರಿಗೂ ವಿಮೆ ಪರಿಹಾರವನ್ನು ನೀಡುವ ಅವಕಾಶವಿರುವುದಿಲ್ಲ.<br><br>ಈ ಯೋಜನೆ ಕುರಿತು ರೈತರಿಗೆ ಮಾಹಿತಿ ನೀಡಿ ಪ್ರೋತ್ಸಾಹಿಸಲು ಸ್ಥಳೀಯ ಮತ್ತು ರಾಜ್ಯ ಪ್ರಮುಖ ದಿನಪತ್ರಿಕೆಗಳಲ್ಲಿ ಜಾಹಿರಾತು ನೀಡುವ ಮುಖೇನ, ಭಿತ್ತಿಪತ್ರಗಳು ಮತ್ತು ಕರಪತ್ರಗಳ ಮೂಲಕ ಮತ್ತು ಎಲ್ಲಾ ತಾಲ್ಲೂಕು, ಹೋಬಳಿ ಮತ್ತು ಗ್ರಾಮಪಂಚಾಯಿತಿಗಳಲ್ಲಿ ನಡೆಸಲಾಗುವ ಕೃಷಿ ಅಭಿಯಾನ ಕಾರ್ಯಕ್ರಮದ ಮೂಲಕ, ತರಬೇತಿಗಳು, ಸಮೂಹ ಮಾಧ್ಯಮಗಳ ಮೂಲಕ, ಜನಸ್ಪಂದನ ಮತ್ತು ಗ್ರಾಮಸಭೆಗಳಲ್ಲಿ ಜಾಗೃತಿ ಮೂಡಿಸಲಾಗುತ್ತಿದೆ. ಹಾಗೂ ವಿಮಾ ಸಂಸ್ಥೆಗಳಿಂದಲೂ ಸಹ ಸಮೂಹ ಮಾಧ್ಯಮಗಳ ಮೂಲಕ ಹೆಚ್ಚಿನ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಜಾಗೃತಿ ಮೂಡಿಸಲಾಗಿದೆ.<br><br>ಈ ರೀತಿಯಾಗಿ ಬೆಳೆ ವಿಮೆ ಪದ್ಧತಿಯನ್ನು ದಿನದಿಂದ ದಿನಕ್ಕೆ ವೈಜ್ಞಾನಿಕವಾಗಿ ಉನ್ನತೀಕರಣ ಮಾಡುತ್ತಿದ್ದು, ನಿರೀಕ್ಷಿತ ಮಟ್ಟ ತಲುಪುವ ನಿಟ್ಟಿನಲ್ಲಿ ಕ್ರಮ ವಹಿಸಲಾಗಿದೆ. |
| ಇ) | ಬಂದಿದ್ದಲ್ಲಿ, ಸದರಿ ಯೋಜನೆಯನ್ನು ಯಶಸ್ವಿಗೊಳಿಸಿ ಪರಿಣಾಮಕಾರಿಯಾಗಿ ಜಾರಿಗೊಳಿಸಿಲು ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಈ ಯೋಜನೆ ಕುರಿತು ರೈತರಿಗೆ ಮಾಹಿತಿ ನೀಡಿ ಪ್ರೋತ್ಸಾಹಿಸಲು ಸ್ಥಳೀಯ ಮತ್ತು ರಾಜ್ಯ ಪ್ರಮುಖ ದಿನಪತ್ರಿಕೆಗಳಲ್ಲಿ ಜಾಹಿರಾತು ನೀಡುವ ಮುಖೇನ, ಭಿತ್ತಿಪತ್ರಗಳು ಮತ್ತು ಕರಪತ್ರಗಳ ಮೂಲಕ ಮತ್ತು ಎಲ್ಲಾ ತಾಲ್ಲೂಕು, ಹೋಬಳಿ ಮತ್ತು ಗ್ರಾಮಪಂಚಾಯಿತಿಗಳಲ್ಲಿ ನಡೆಸಲಾಗುವ ಕೃಷಿ ಅಭಿಯಾನ ಕಾರ್ಯಕ್ರಮದ ಮೂಲಕ ,ಜನಸ್ಪಂದನ ಮತ್ತು ಗ್ರಾಮಸಭೆಗಳಲ್ಲಿ ಜಾಗೃತಿ ಮೂಡಿಸಲಾಗುತ್ತಿದೆ. ಅಲ್ಲದೇ, ಜಿಲ್ಲಾ, ತಾಲ್ಲೂಕು ಕೃಷಿ ಮತ್ತು ತೋಟಗಾರಿಕೆ ಕಛೇರಿಗಳು ಮತ್ತು ರೈತ ಸಂಪರ್ಕ ಕೇಂದ್ರಗಳಿಗೆ ಭೇಟಿ ನೀಡುವ ರೈತರಿಗೆ ಯೋಜನೆಯ ಕುರಿತು ಮಾಹಿತಿ ನೀಡಿ ಪ್ರೋತ್ಸಾಹಿಸಲಾಗುತ್ತಿದೆ. |

| | | |
|---|---|---|
| | | ದೂರದರ್ಶನ ಮತ್ತು ಆಕಾಶವಾಣಿ ಮೂಲಕ ರಾಜ್ಯ, ಜಿಲ್ಲಾ ಮಟ್ಟಗಳಲ್ಲಿಯೂ ಸಹಾ ಎಲ್ಲಾ ಹಂಗಾಮಿನ ಪ್ರಾರಂಭದಲ್ಲಿ ಬೆಳೆ ವಿಮೆ ಯೋಜನೆಯ ಪರಿಚಯ ಮತ್ತು ನೋಂದಣಿ ಕುರಿತು ಮಾಹಿತಿಯನ್ನು ನೀಡಲಾಗುತ್ತಿದೆ.<br><br>ಸರ್ಕಾರವು ಈ ಯೋಜನೆಯನ್ನು ಅತ್ಯಂತ ಯಶಸ್ವಿಯಾಗಿ ಮತ್ತು ಪಾರದರ್ಶಕವಾಗಿ ಅನುಷ್ಠಾನಗೊಳಿಸಲಾಗುತ್ತಿದ್ದು, ಬೆಳೆ ನಷ್ಟ ಹೊಂದಿದ ನೈಜ ರೈತರಿಗೆ ವಿಮಾ ಪರಿಹಾರ ಮೊತ್ತವನ್ನು ದೊರಕಿಸುವ ಸಲುವಾಗಿ ಜಿ.ಪಿ.ಎಸ್ ಆಧಾರಿತ ಬೆಳೆ ಸಮೀಕ್ಷೆ ದತ್ತಾಂಶ ಬಳಸಿ, ಸಂರಕ್ಷಣೆ ತಂತ್ರಾಂಶದಲ್ಲಿ ಮೊಬೈಲ್ ಆ್ಯಪ್ ಮುಖಾಂತರ ಕೈಗೊಳ್ಳುವ ಬೆಳೆ ಕಟಾವು ಪ್ರಯೋಗಗಳ ವರದಿಯಂತೆ ವಿಮೆ ಪರಿಹಾರ ಲೆಕ್ಕ ಹಾಕಿ ಅರ್ಹ ರೈತರ ಖಾತೆಗೆ ನೇರವಾಗಿ ವಿಮಾ ಸಂಸ್ಥೆಯವರ ಮೂಲಕ ಬೆಳೆ ವಿಮಾ ಪರಿಹಾರ ಜಮೆ ಮಾಡುವಂತೆ ಕ್ರಮ ವಹಿಸಲಾಗಿದೆ. |

**ಸಂಖ್ಯೆ:- ಕೃಇ/14/ಕೃಕೈಉ/2021**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು

**LCQ-332**

**ಅನುಬಂಧ-1**

**ಕರ್ನಾಟಕ ರೈತ ಸುರಕ್ಷ ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆಯಡಿ 2016-17 ರಿಂದ 2019-20ನೇ ಸಾಲಿನವರೆಗೆ ವಿಮಾ ಸಂಸ್ಥೆಯವರಿಂದ ಇತ್ಯರ್ಥಪಡಿಸಿರುವ ಬೆಳೆ ವಿಮೆ ಪರಿಹಾರದ ಮೊತ್ತದ ವಿವರ**

**(ರೂ. ಲಕ್ಷಗಳಲ್ಲಿ)**

| ವರ್ಷ/ ಹಂಗಾಮು | ನೋಂದಣಿಯಾದ ಒಟ್ಟು ರೈತರ ಸಂಖ್ಯೆ | ಒಟ್ಟು ವಿಮಾ ಕಂತಿನ ಮೊತ್ತ | ಒಟ್ಟು ಇತ್ಯರ್ಥಪಡಿಸಿರುವ ಪರಿಹಾರ | |
|---|---|---|---|---|
| | | | ಫಲಾನುಭವಿಗಳ ಸಂಖ್ಯೆ | ಮೊತ್ತ |
| 2016 ಮುಂಗಾರು | 943550 | 78985.57 | 645585 | 99337.51 |
| 2016-17 ಹಿಂಗಾರು & ಬೇಸಿಗೆ | 1179697 | 62915.02 | 1132135 | 80939.08 |
| 2017 ಮುಂಗಾರು | 1333153 | 170892.42 | 541355 | 59392.86 |
| 2017-18ರ ಹಿಂಗಾರು & ಬೇಸಿಗೆ | 22921 | 2152.76 | 8981 | 1050.48 |
| 2018 ಮುಂಗಾರು | 1222988 | 113968.06 | 813377 | 157256.67 |
| 2018-19 ರ ಹಿಂಗಾರು & ಬೇಸಿಗೆ | 561962 | 38636.19 | 451882 | 99964.83 |
| 2019 ಮುಂಗಾರು | 1420443 | 131581.25 | 462985 | 55888.11 |
| 2019-20ರ ಹಿಂಗಾರು & ಬೇಸಿಗೆ | 681486 | 48955.53 | ಬೆಳೆ ಸಮೀಕ್ಷೆ ದತ್ತಾಂಶವನ್ನು ಸಂರಕ್ಷಣೆ ತಂತ್ರಾಂಶದೊಂದಿಗೆ Integration ಮಾಡುವ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. | |